# ಫಾಕಿಹಾನಿ ರಹ್ಮತುಲ್ಲಾಹಿ ಅಲೈಹಿ ರವರ ಉದ್ಧರಣೆಯನ್ನು ಹಾಫಿಳ್ ಇಮಾಂ ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ಉತ್ತರ ಕೊಡುವುದು ಹೀಗೆ:

ullalnisar@gmail.com

**ಅರ್ಪಣೆ**

ಅಲ್ಲಾಹನೇ ನಮ್ಮ ಸದುದ್ದೇಶಗಳನ್ನು ಈಡೇರಿಸು, ನನ್ನ (ನಿಸಾರ್ ಸಖಾಫಿ ಉಳ್ಳಾಲ)ಪ್ರೀಯ ಸಹೋದರಿ ಮರ್ಹೂಮತ್ ಫಾತಿಮತು ಝೋಹರಾ ರವರ ಪಾರತ್ರಿಕ ಜೀವನವನ್ನು ವಿಜಯಗೊಳಿಸು..

ಮಾಲಿಕೀ ಮದ್ಸ್ ಹಬ್ ಗಾರರಾದ ಫಾಕಿಹಾನಿ
ರಹ್ಮತುಲ್ಲಾಹಿ ಅಲೈಹಿ ರವರು ನೆಬಿ ದಿನಾಚರಣೆ
ಯನ್ನು ವಿಮರ್ಶಿಸಿ ಮಾತಾಡಿದ್ದನ್ನು ಹಾಫಿಳ್
ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ರವರು ಶಕ್ತಿಯುತ
ವಾಗಿ ಖಂಡಿಸಿದ್ದಾರೆ.ಫಾಕಿಹಾನಿ ರಹ್ಮತುಲ್ಲಾಹಿ
ಅಲೈಹಿ ರವರ ಪರಾಮರ್ಶಗಳೂ ಇಮಾಂ
ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ರವರ
ಉತ್ತರವನ್ನೂ ಈ ಕೆಳಗೆ ವಿವರಿಸಲಾಗಿದೆ. ಮುಖ್ಯ
ವಾಗಿ ಐದು ಕಾರ್ಯಗಳನ್ನು ಅಡಿಸ್ತಾನ
ಮಾಡಿಯಾಗಿದೆ ಫಾಕಿಹಾನಿ ರಹ್ಮತುಲ್ಲಾಹಿ ಅಲೈಹಿ
ರವರ ಹೇಳಿಕೆ .ಪ್ರಸ್ತುತ ಐದು ಕಾರ್ಯಗಳನ್ನೂ
ಅದಕ್ಕಿರುವ ಉತ್ತರ ವೂ ಇಮಾಂ ಸುಯೂತ್ವೀ
ರಹ್ಮತುಲ್ಲಾಹಿ ಅಲೈಹಿ ರವರ ಉದ್ಧರಣೆಗಳ ಮೂಲಕ

ಸ್ಪಷ್ಟ ವಾಗಿ ನೀಡಲಾಗಿದೆ.

?..ಫಾಕಿಹಾನಿ ರಹ್ಮತುಲ್ಲಾಹಿ ಅಲೈಹಿ ರವರ ವಾದ ಒಂದು:

لَا أَعْلَمُ لِهَذَا الْمَوْلِدِ أَصْلًا فِي كِتَابٍ وَلَا سُنَّةٍ،

"“ ಈ ಮೌಲಿದ್ ಆಚರಣೆಗೆ ಖುರ್ಆನ್ ನಿಂದಲೋ ಸುನ್ನತ್ತಿನಿಂದಲೋ ಅಡಿಸ್ತಾನ ವಿರುವುದಾಗಿ ನಾನು ಅರಿತಿಲ್ಲ.”

=..ಇಮಾಮ್ ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ರವರ ಖಂಡನೆ:

نَفْيُ الْعِلْمِ لَا يَلْزَمُ مِنْهُ نَفْيُ الْوُجُودِ، وَقَدِ اسْتَخْرَجَ لَهُ إِمَامُ الْحُفَّاظِ أبو الفضل ابن حجر أَصْلًا مِنَ السُّنَّةِ، وَاسْتَخْرَجْتُ لَهُ أَنَا أَصْلًا ثَانِيًا

"ತನಗೆ ಗೊತ್ತಿಲ್ಲ ಎಂದ ಮಾತ್ರಕ್ಕೆ ಹಾಗೆ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ. ಹಾಫಿಳ್ ಗಳ ಇಮಾಂ ಅಬುಲ್ ಫಳ್ಲ್ ಅಹ್ಮದುಬ್ನು ಹಜರ್ ರಹ್ಮತುಲ್ಲಾಹಿ ಅಲೈಹಿ ರವರು ಸುನ್ನತ್ತಿನಿಂದ ಒಂದು ಅಡಿಸ್ತಾನ ಕಂಡು ಹಿಡಿದಿದ್ದಾರೆ. ಅದಕ್ಕಿರುವ ಎರಡನೇ ಅಡಿಸ್ತಾನವನ್ನು ನಾನೂ ಕಂಡು ಹಿಡಿದಿದ್ದೇನೆ."



?..ಫಾಕಿಹಾನಿ ರವರ ವಾದ ಎರಡು:

وَلَا يُنْقَلُ عَمَلُهُ عَنْ أَحَدٍ مِنْ عُلَمَاءِ الْأُمَّةِ الَّذِينَ هُمُ الْقُدْوَةُ فِي الدِّينِ الْمُتَمَسِّكُونَ بِآثَارِ الْمُتَقَدِّمِينَ، بَلْ هُوَ بِدْعَةٌ أَحْدَثَهَا الْبَطَّالُونَ وَشَهْوَةُ نَفْسٍ اعْتَنَى بِهَا الْأَكَّالُونَ

"“ ಧರ್ಮ ದಲ್ಲಿ ಮಾದರಿ ಯೋಗ್ಯರಾದವರೂ ಪೂರ್ವಿಕರ ಪಾದವನ್ನು ಹಿಂಬಾಲಿಸಿ ಬರುವವರೂ ಆದ ಒಬ್ಬ ಪಂಡಿತನೂ ಅದು ಗೈದದಾಗಿ ಉದ್ಧರಿಸಲ್ಪಟ್ಟಿಲ್ಲ. ಆದರೆ ಅದು ಬಿದ್ ಆತ್ ಆಗಿದೆ. ಅಸತ್ಯದ ವಕ್ತಾರರೂ ಶರೀರದ ಇಚ್ಚೆಗೆ ಅನುಸರಿಸಿ ಕಾರ್ಯಾಚರಿಸುವವರೂ ಹೊಸತಾಗಿ ನಿರ್ಮಿಸಿ ಉಂಟಾದದ್ದಾಗಿದೆ. ತಿಂಡಿ ಬೋಕರಾಗಿದ್ದಾರೆ ಅದನ್ನು ನಡೆಸುತ್ತಿರುವುದು. "

=..ಇಮಾಂ ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ರವರ ಖಂಡನೆ:

قَدْ تَقَدَّمَ أَنَّهُ أَحْدَثَهُ مَلِكٌ عَادِلٌ عَالِمٌ وَقَصَدَ بِهِ التَّقَرُّبَ إِلَى اللَّهِ تَعَالَى، وَحَضَرَ عِنْدَهُ فِيهِ الْعُلَمَاءُ وَالصُّلَحَاءُ مِنْ غَيْرِ نَكِيرٍ مِنْهُمْ، وَارْتَضَاهُ ابن دحية وَصَنَّفَ لَهُ مِنْ أَجْلِهِ كِتَابًا، فَهَؤُلَاءِ عُلَمَاءُ مُتَدَيِّنُونَ رَضَوْهُ وَأَقَرُّوهُ وَلَمْ يُنْكِرُوهُ

"ಅತೀ ವಿಪುಲವಾಗಿ ಮೌಲಿದ್ ಆಚರಣೆ ಸಂಘಡಿಸಿದ್ದು ಪಂಡಿತನೂ ನೀತಿ ವಂತನೂ ಆದ ಓರ್ವ ಅಧಿಕಾರಿಯಾಗಿದ್ದಾನೆ ಎಂದು ನಾವು ಮುಂಚೆ ಹೇಳಿದ್ದೇವೆ.ಅಲ್ಲಾಹುವಿನ ಸಾಮಿಪ್ಯ ಉದ್ದೇಶಿಸಿಯಾಗಿದೆ ಅವರು ಅದನ್ನು ಸಂಘಟಿಸಿದ್ದು .ಪ್ರಸ್ತುತ ಮೌಲಿದ್ ಆಚರಣೆ ಯಲ್ಲಿ ಸ್ವಾಲಿಹೀನ್ ಗಳೂ ಪಂಡಿತ ರೂ ಪಾಲ್ಗೊಂಡಿದ್ದರು ಅವರ್ಯಾರು ಅದನ್ನು ವಿಮರ್ಶಿಸಿಲ್ಲ. ಇಬ್ನು ದಿಹ್ಯ ರಹ್ಮತುಲ್ಲಾಹಿ ಅಲೈಹಿ ರವರು ಅದನ್ನು ತೃಪ್ತಿ ಪಟ್ಟು ಮೌಲಿದ್ ಆಚರಣೆ ಯ ಹೆಸರಲ್ಲಿ ರಾಜನಿಗೆ ಒಂದು ಮೌಲಿದ್ ಗ್ರಂಥ ರಚಿಸಿ ಕೊಟ್ಟಿದ್ದರು.ಅವಾಗ ಧರ್ಮದಲ್ಲಿದ್ದ ನಿಷ್ಠಾವಂತ ಪಂಡಿತರುಗಳು ಅದನ್ನು ಅಂಗೀಕರಿಸಿ ಇಷ್ಟಪಡುತ್ತಿದ್ದರೂ ಅಲ್ಲವೇ...ಅದನ್ನು ಅವರ್ಯಾರು ವಿಮರ್ಶಿಸಿಲ್ಲ."



?..ಫಾಕಿಹಾನಿರ ವಾದ ಮೂರು:

بِدَلِيلِ أَنَّا إِذَا أَدَرْنَا عَلَيْهِ الْأَحْكَامَ الْخَمْسَةَ قُلْنَا: إِمَّا أَنْ يَكُونَ وَاجِبًا أَوْ مَنْدُوبًا أَوْ مُبَاحًا أَوْ مَكْرُوهًا أَوْ مُحَرَّمًا، وَلَيْسَ بِوَاجِبٍ إِجْمَاعًا وَلَا مَنْدُوبًا؛ لِأَنَّ حَقِيقَةَ الْمَنْدُوبِ مَا طَلَبَهُ الشَّرْعُ مِنْ غَيْرِ ذَمٍّ عَلَى تَرْكِهِ، وَهَذَا لَمْ يَأْذَنْ فِيهِ الشَّرْعُ وَلَا فَعَلَهُ الصَّحَابَةُ وَلَا التَّابِعُونَ الْمُتَدَيِّنُونَ فِيمَا عَلِمْتُ،

ಮೌಲಿದ್ ಆಚರಣೆಯನ್ನು ಧರ್ಮದ ಐದು ನಿಯಮಗಳೊಂದಿಗೆ ಪರೀಕ್ಷಿಸಿ ನಾವು ಹೀಗೆ ಹೇಳುತ್ತೇವೆ: ಒಂದೋ ಅದು ವಾಜಿಬ್, ಅಲ್ಲವಾದರೆ ಅದು ಸುನ್ನತ್, ಅಲ್ಲವಾದರೆ ಹಲಾಲ್ ಅಲ್ಲವಾದರೆ ಕರಾಹತ್ ಅಲ್ಲವಾದರೆ ಹರಾಮ್ ಆಗಬೇಕು. ಅದು ವಾಜಿಬಲ್ಲ ಎಂಬ ಕಾರ್ಯವೂ ಇಜ್‌ಮಾಅ್ ನಿಂದ ಸ್ಥಿರಪಟ್ಟದಾಗಿದೆ. ಆದರೆ ಅದು ಸುನ್ನತ್ ಕೂಡಾ ಅಲ್ಲ.ಕಾರಣ, ಉಪೇಕ್ಷಿಸುವುದರ ಮೇಲೆ ಆಕ್ಷೇಪಿಸದೆ ಧರ್ಮದಲ್ಲಿ ಅಜ್ಞಾಪಿಸಲ್ಪಡುವ ಕಾರ್ಯವಾಗಿದೆ ಸುನ್ನತ್. ನನಗಿರುವ ತಿಳುವಳಿಕೆ ಅನುಸರಿಸಿ ಇದಕ್ಕೆ ಧರ್ಮದಲ್ಲಿ ಸಮ್ಮತ ನೀಡಿದಾಗಿಯೋ ಸ್ವಹಾಬಿಗಳೋ ತಾಬಿಉಗಳೋ ಹಾಗೂ ಧರ್ಮದಲ್ಲಿನ ನಿಷ್ಠಾವಂತ ರಾದ ಪಂಡಿತರುಗಳಾರು ಅದು ಮಾಡಿಲ್ಲ."

=..ಇಮಾಂ ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ರವರ ಖಂಡನೆ:

وَقَوْلُهُ: وَلَا مَنْدُوبًا؛ لِأَنَّ حَقِيقَةَ الْمَنْدُوبِ مَا طَلَبَهُ الشَّرْعُ، يُقَالُ عَلَيْهِ: إِنَّ الطَّلَبَ فِي الْمَنْدُوبِ تَارَةً يَكُونُ بِالنَّصِّ وَتَارَةً يَكُونُ بِالْقِيَاسِ، وَهَذَا وَإِنْ لَمْ يَرِدْ فِيهِ نَصٌّ، فَفِيهِ الْقِيَاسُ عَلَى الْأَصْلَيْنِ الْآتِي ذِكْرُهُمَا،

ಮೌಲಿದ್ ಆಚರಣೆ ಸುನ್ನತ್ತಾಗಲು ಸಾಧ್ಯವಿಲ್ಲ, ಕಾರಣ, ಧರ್ಮ ಅಜ್ಞಾಪಿಸುವ ಕಾರ್ಯವಾಗಿದೆ ಸುನ್ನತ್' ಎಂಬ ಫಾಕಿಹಾನಿ ರಹ್ಮತುಲ್ಲಾಹಿ ಅಲೈಹಿ ರವರ ಪರಾಮರ್ಶವನ್ನು ಹೀಗೆ ಪ್ರತಿಕ್ರಯಿಸಬಹುದು: ಸುನ್ನತ್ತಾದ ಕಾರ್ಯ ವನ್ನು ಅಜ್ಞಾಪಿಸುವುದು ಕೆಲವೊಮ್ಮೆ ವ್ಯಕ್ತವಾದ ಪರಾಮರ್ಶದಿಂದಲೂ ಕೆಲವೊಮ್ಮೆ ಕಿಯಾಸ್ ನಿಂದಲೂ ಆಗಬಹುದು.ಮೌಲಿದ್ ಆಚರಣೆಗೆ ವ್ಯಕ್ತವಾದ ಪರಾಮರ್ಶದೊಂದಿಗೆ ಅಜ್ಞಾಪನೆ ಬಂದಿಲ್ಲ ಎಂದಾದರೂ ನಂತರ ಹೇಳುವ ಎರಡು ಅಡಿಸ್ಥಾನದ ಮೇಲೆ ಇದನ್ನು ತಾರತಮ್ಯ ಮಾಡುವ ಮೂಲಕ ಲಭಿಸುವಂತಹ ಅಜ್ಞಾಪನೆ ಇದೆ." (ಅಂದರೆ: ಮೌಲಿದ್ ಆಚರಣೆಯ ಪ್ರಮಾಣ ಖಿಯಾಸ್ ಎಂದಾಗಿದೆ ಅರ್ಥ)."

## ?..ಫಾಕಿಹಾನಿ  ರವರ ವಾದ ನಾಲ್ಕು:

وَلَا جَائِزٌ أَنْ يَكُونَ مُبَاحًا؛ لِأَنَّ الِابْتِدَاعَ فِي الدِّينِ لَيْسَ مُبَاحًا بِإِجْمَاعِ الْمُسْلِمِينَ، فَلَمْ يَبْقَ إِلَّا أَنْ يَكُونَ مَكْرُوهًا أَوْ حَرَامًا، وَحِينَئِذٍ يَكُونُ الْكَلَامُ فِيهِ فِي فَصْلَيْنِ، وَالتَّفْرِقَةُ بَيْنَ حَالَيْنِ: أَحَدُهُمَا: أَنْ يَعْمَلَهُ رَجُلٌ مِنْ عَيْنِ مَالِهِ لِأَهْلِهِ وَأَصْحَابِهِ وَعِيَالِهِ، لَا يُجَاوِزُونَ فِي ذَلِكَ الِاجْتِمَاعَ عَلَى أَكْلِ الطَّعَامِ وَلَا يَقْتَرِفُونَ شَيْئًا مِنَ الْآثَامِ، وَهَذَا الَّذِي وَصَفْنَاهُ بِأَنَّهُ بِدْعَةٌ مَكْرُوهَةٌ وَشَنَاعَةٌ

"ಅದು ಹಲಾಲ್ ಆಗುವುದಕ್ಕೂ ಸಾಧ್ಯತೆ ಇಲ್ಲ. ಕಾರಣ,ಧರ್ಮದಲ್ಲಿ ಬಿದ್‌ಅತ್ ಉಂಟು ಮಾಡುವಿಕೆಯೂ ಹಲಾಲ್ ಅಲ್ಲವೆಂದೂ ಮುಸ್ಲಿಮ್‌ಗಳು ಏಕಾಭಿಪ್ರಾಯವಿರುವ ಕಾರ್ಯವಾಗಿದೆ.ಅದು ಕರಾಹತ್ತೋ ಹರಾಮೋ ಆಗಬಹುದು ಈ ವಿಷಯದಲ್ಲಿ ಇದರ ಕುರಿತು ಮಾತಾಡುವುದಾದರೆ ಅದನ್ನು ಎರಡು ರೂಪದಿಂದ ವಿಂಗಡಿಸಬಹುದು:

ಒಂದು: ಒಬ್ಬ ವ್ಯಕ್ತಿ ತನ್ನ ಸಂಪತ್ತಿನಿಂದ ಕುಟುಂಬಕ್ಕೂ ಬಂಧುಮಿತ್ರರಿಗೂ ಬೇಕಾಗಿ ಮೌಲಿದ್ ಆಚರಣೆಯನ್ನು ಸಂಘಟಿಸುತ್ತಾರೆ ಆಹಾರ ಸೇವಿಸುವುದುಕ್ಕಿಂತಲೂ ಅಧಿಕವಾಗಿ

ಯಾವುದೊಂದನ್ನು ಆ ಸಮ್ಮೇಳನದಲ್ಲಿ ಅವರು ಮಾಡುವುದಿಲ್ಲ ಅದರ ಭಾಗವಾಗಿ ಯಾವುದೊಂದು ತಪ್ಪು ಕೃತ್ಯವನ್ನು ಮಾಡುವುದು ಇಲ್ಲ ಕರಾಹತ್ತಾದ ಬಿದ್‌ಅತ್ ಎಂದೂ ದೌರ್ಜನ್ಯ ವಾದದ್ದು ಎಂದು ನಾವು ಹೇಳಿದ್ದು ಇದರ ಕುರಿತಾಗಿದೆ.."

=..ಇಮಾಂ ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ರವರ ಖಂಡನೆ:

وَقَوْلُهُ: وَلَا جَائِزٌ أَنْ يَكُونَ مُبَاحًا؛ لِأَنَّ الِابْتِدَاعَ فِي الدِّينِ لَيْسَ مُبَاحًا بِإِجْمَاعِ الْمُسْلِمِينَ، كَلَامٌ غَيْرُ مُسَلَّمٍ؛ لِأَنَّ الْبِدْعَةَ لَمْ تَنْحَصِرْ فِي الْحَرَامِ وَالْمَكْرُوهِ، بَلْ قَدْ تَكُونُ أَيْضًا مُبَاحَةً وَمَنْدُوبَةً وَوَاجِبَةً، قَالَ النووي فِي تَهْذِيبِ الْأَسْمَاءِ وَاللُّغَاتِ: الْبِدْعَةُ فِي الشَّرْعِ هِيَ إِحْدَاثُ مَا لَمْ يَكُنْ فِي عَهْدِ رَسُولِ اللَّهِ صَلَّى اللَّهُ عَلَيْهِ وَسَلَّمَ وَهِيَ مُنْقَسِمَةٌ إِلَى حَسَنَةٍ وَقَبِيحَةٍ، وَقَالَ الشَّيْخُ عز الدين بن عبد السلام فِي الْقَوَاعِدِ: الْبِدْعَةُ مُنْقَسِمَةٌ إِلَى وَاجِبَةٍ وَمُحَرَّمَةٍ وَمَنْدُوبَةٍ وَمَكْرُوهَةٍ وَمُبَاحَةٍ، قَالَ: وَالطَّرِيقُ فِي ذَلِكَ أَنْ نَعْرِضَ الْبِدْعَةَ عَلَى قَوَاعِدِ الشَّرِيعَةِ، فَإِذَا دَخَلَتْ فِي قَوَاعِدِ الْإِيجَابِ فَهِيَ وَاجِبَةٌ، أَوْ فِي قَوَاعِدِ التَّحْرِيمِ فَهِيَ مُحَرَّمَةٌ، أَوِ النَّدْبِ فَمَنْدُوبَةٌ، أَوِ الْمَكْرُوهِ

فَمَكْرُوهَةٌ، أَوِ الْمُبَاحِ فَمُبَاحَةٌ، وَذَكَرَ لِكُلِّ قِسْمٍ مِنْ هَذِهِ الْخَمْسَةِ أَمْثِلَةً إِلَى أَنْ قَالَ: وَلِلْبِدَعِ الْمَنْدُوبَةِ أَمْثِلَةٌ: مِنْهَا إِحْدَاثُ الرُّبَطِ وَالْمَدَارِسِ وَكُلُّ إِحْسَانٍ لَمْ يُعْهَدْ فِي الْعَصْرِ الْأَوَّلِ، وَمِنْهَا التَّرَاوِيحُ وَالْكَلَامُ فِي دَقَائِقِ التَّصَوُّفِ وَفِي الْجَدَلِ، وَمِنْهَا جَمْعُ الْمَحَافِلِ لِلاسْتِدْلَالِ فِي الْمَسَائِلِ إِنْ قُصِدَ بِذَلِكَ وَجْهُ اللَّهِ تَعَالَى

"ಅದು ಹಲಾಲಗುವುದಕ್ಕೆ ಸಾಧ್ಯತೆ ಇಲ್ಲ ಕಾರಣ ಧರ್ಮದಲ್ಲಿ ಬಿದ್‌ಆತ್ ಉಂಟುಮಾಡುವಿಕೆಯು ಹಲಾಲ್ ಅಲ್ಲವೆಂದು ಒಮ್ಮತಾಭಿಪ್ರಾಯ ವಿರುವ ಕಾರ್ಯವಾಗಿದೆ ಎಂಬ ಅವರ ವಾದವನ್ನು ಅಂಗೀಕರಿಸಲು ಸಾಧ್ಯವಿಲ್ಲ ಕಾರಣ ಬಿದ್‌ಆತ್ ಹರಾಮಿನಲ್ಲೂ ಕರಾಹತಿನಲ್ಲೂ ಪರಿಮಿತ ವಾಗುವುದಲ್ಲ. ಬದಲಾಗಿ, ವಾಜಿಬಾಗಿಯೂ ಹಲಾಲಾಗಿಯೂ ಸುನ್ನತಾಗಿಯೂ ಅದು ಬರಬಹುದು. " ತಹ್ ದೀಬುಲ್ ಅಸ್ಮಾಇ ವಲ್ಲುಗಾತಗ್' ಎಂಬ ಗ್ರಂಥ ದಲ್ಲಿ ಇಮಾಂ ನವವೀ ರಳಿಯಲ್ಲಾಹು ಅನ್ಹು ರವರು ಹೇಳುತ್ತಾರೆ: ನೆಬಿ ಸ್ವಲ್ಲಲಾಹು ಅಲೈಹಿ ವಸಲ್ಲಮರವರ ಕಾಲದಲ್ಲಿ ತಿಳಿಯಲ್ಪಡದ ಕಾರ್ಯವನ್ನು ಹೊಸತಾಗಿ ಉಂಟು ಮಾಡುವುದಾಗಿದೆ ಬಿದ್‌ಆತ್.ಅದು ಒಳ್ಳೆಯ ಬಿದ್‌ಆತ್

ಆಗಿಯೂ, ಕೆಟ್ಟ ಬಿದ್‌ಅತ್ ಆಗಿಯೂ ಬರಬಹುದು. ' "ಅಲ್ ಕವಾಇದ್' "ಎಂಬ ಗ್ರಂಥದಲ್ಲಿ ಶೈಕ್ ಇಝ್ಝುದ್ದೀನ್ ಅಬ್ದಿ ಸಲಾಮ್ ರಳಿಯಲ್ಲಾಹು ಅನ್ಹು' ರವರು ಹೇಳುತ್ತಾರೆ: ಬಿದ್ ಆತ್;- ವಾಜಿಬ್ , ಹರಾಮ್, ಕರಾಹತ್, ಸುನ್ನತ್, ಹಲಾಲ್ ಎಂದು ಹೀಗೆ ಐದಾಗಿ ವಿಭಾಗಿಸಲ್ಪಡುವುದು. ಒಂದು ಬಿದ್‌ಅತ್ ಐದರಲ್ಲಿ ಯಾವುದರಲ್ಲಿ ಒಳಗೊಂಡದ್ದಾಗಿದೆ ಎಂಬುದನ್ನು ತಿಳಿಯಲಿಕ್ಕಿರುವ ಮಾರ್ಗ ಶರೀಅತ್ತಿನ ತತ್ವ ಗಳೊಂದಿಗೆ ಅದನ್ನು ತರಾತಮ್ಯ ಮಾಡಿ ನೋಡುವುದಾಗಿದೆ ನಿರ್ಬಂಧ ವಾಗ ಬೇಕಾದ ನಿಯಮಾವಳಿಗಳಲ್ಲಿ ಒಳ ಪಡುವುದಾದರೆ ಅದು ನಿರ್ಬಂಧವೂ ಹರಾಮ್ ನಿಯಮಾವಳಿಗಳಲ್ಲಿ ಒಳಪಡುವುದಾದರೆ ಅದು ಹರಾಮೂ, ಸುನ್ನತ್‌ನ ನಿಯಮಾವಳಿ ಗಳಲ್ಲಿ ಒಳಪಡುವುದಾದರೆ ಅದು ಸುನ್ನತ್ತೂ, ಕರಾಹತ್‌ನ ನಿಯಮಾವಳಿಗಳಲ್ಲಿ ಒಳಪಡುವುದಾದರೆ ಅದು ಕರಾಹತ್ತೂ, ಹಲಾಲ್‌ನ ನಿಯಮಗಳು ಬಾಧಕವಾಗುವುದಾದರೆ ಅದು ಹಲಾಲೂ ಆಗಿದೆ ಎಂದೂ ಅರ್ಥೈಸಬಹುದಾಗಿದೆ. "ಇದರಲ್ಲಿರುವ ಒಂದೊಂದಕ್ಕೂ ಅವರು ಉದಾಹರಣೆ ಗಳೊಂದಿಗೆ ವಿಶದೀಕರಿಸುತ್ತಾರೆ. ಸುನ್ನತ್ತಾದ ಬಿದ್‌ಅತ್‌ಗೆ ಹಲವಾರು ಉದಾಹರಣೆಗಳು ಇದೆ. ಮದ್ರಸ ಗಳೂ..ಗಡಿ

**ಭಾಗದಲ್ಲಿ ಸೈನ್ಯ ಸನ್ನದ್ಧ ಗೊಳಿಸುವಿಕೆಯೂ..ತರಾವೀಹ್ ನಮಾಜ್..ತಸವ್ವುಫ್‌ನ ಅಗಾಧವಾದ ವಿಷಯಗಳನ್ನು ಚರ್ಚೆ ಮಾಡುವುದೂ...ಅಲ್ಲಾಹನ ತೃಪ್ತಿಯನ್ನು ಲಕ್ಷ್ಯವಿಟ್ಟು ವಾದ ಪ್ರತಿವಾದ ಸಂಘಟಿಸುವುದು...**

**=..ಇಮಾಂ ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ರವರು ಮುಂದುವರಿದು ಬರೆಯುತ್ತಾರೆ:**

وَرَوَى الْبَيْهَقِيُّ بِإِسْنَادِهِ فِي مَنَاقِبِ الشَّافِعِيِّ عَنِ الشَّافِعِيِّ قَالَ: الْمُحْدَثَاتُ مِنَ الْأُمُورِ ضَرْبَانِ، أَحَدُهُمَا: مَا أُحْدِثَ مِمَّا يُخَالِفُ كِتَابًا أَوْ سُنَّةً أَوْ أَثَرًا أَوْ إِجْمَاعًا، فَهَذِهِ الْبِدْعَةُ الضَّلَالَةُ، وَالثَّانِي: مَا أُحْدِثَ مِنَ الْخَيْرِ لَا خِلَافَ فِيهِ لِوَاحِدٍ مِنْ هَذَا، وَهَذِهِ مُحْدَثَةٌ غَيْرُ مَذْمُومَةٍ، وَقَدْ قَالَ عمر رَضِيَ اللَّهُ عَنْهُ فِي قِيَامِ شَهْرِ رَمَضَانَ: "نِعْمَتِ الْبِدْعَةُ هَذِهِ"، يَعْنِي أَنَّهَا مُحْدَثَةٌ لَمْ تَكُنْ، وَإِذْ كَانَتْ فَلَيْسَ فِيهَا رَدٌّ لِمَا مَضَى. هَذَا آخِرُ كَلَامِ الشَّافِعِيِّ، فَعُرِفَ بِذَلِكَ مَنْعُ قَوْلِ الشَّيْخِ تاج الدين: وَلَا جَائِزٌ أَنْ تَكُونَ مُبَاحًا، إِلَى قَوْلِهِ: وَهَذَا الَّذِي وَصَفْنَاهُ بِأَنَّهُ بِدْعَةٌ مَكْرُوهَةٌ، إِلَى آخِرِهِ؛ لِأَنَّ هَذَا الْقِسْمَ مِمَّا أُحْدِثَ وَلَيْسَ فِيهِ

مُخَالَفَةٌ لِكِتَابٍ وَلَا سُنَّةٍ وَلَا أَثَرٍ وَلَا إِجْمَاعٍ، فَهِيَ غَيْرُ مَذْمُومَةٍ كَمَا فِي عِبَارَةِ الشَّافِعِيِّ، وَهُوَ مِنَ الْإِحْسَانِ الَّذِي لَمْ يُعْهَدْ فِي الْعَصْرِ الْأَوَّلِ، فَإِنَّ إِطْعَامَ الطَّعَامِ الْخَالِي عَنِ اقْتِرَافِ الْآثَامِ إِحْسَانٌ، فَهُوَ مِنَ الْبِدَعِ الْمَنْدُوبَةِ كَمَا فِي عِبَارَةِ ابن عبد السلام.

ಮನಾಖಿಬುಶ್ಶಾಫಿಈ ಎಂಬ ಗ್ರಂಥದಲ್ಲಿ ಇಮಾಂ ಶಾಫಿಈ ರಳಿಯಲ್ಲಾಹು ಅನ್ಹು ರವರ ಮಾತನ್ನೂ ಉದ್ಧರಿಸಿ ಇಮಾಂ ಬೈಹಖಿ ರಳಿಯಲ್ಲಾಹು ಅನ್ಹು ರವರು ಬರೆಯುತ್ತಾರೆ: ನೂತನವಾಗಿ ಉಂಟಾದ ಕಾರ್ಯಗಳು ಎರಡು ವಿಧವಾಗಿದೆ. ಒಂದು : ಖುರ್‌ಆನ್ ನೊಂದಿಗೂ ಸುನ್ನತ್ ನೊಂದಿಗೂ ಅಸರಿ ನೊಂದಿಗೂ ಇಜ್ಮಾಅ್ ನೊಂದಿಗೂ (ಇವುಗಳ) ವಿರುದ್ಧವಾಗಿ (ನೂತನವಾಗಿ) ಉಂಟು ಮಾಡಲ್ಪಟ್ಟದ್ದು. ಈ ಬಿದ್‌ಆತ್ (ನೂತನಾಚರ) ಕೆಟ್ಟ ಬಿದ್‌ಆತ್ ಆಗಿದೆ. ಎರಡು: ಮೇಲೆ ಹೇಳಲ್ಪಟ್ಟ ಒಂದಿನೊಂದಿಗೂ ವಿರುದ್ಧವಲ್ಲದ ರೀತಿಯಲ್ಲಿ ಹೊಸತಾಗಿ ಉಂಟು ಮಾಡಿದ ಒಳ್ಳೆಯ ಕಾರ್ಯಗಳು ಆಕ್ಷೇಪಾರ್ಹವಾದ ಬಿದ್‌ಆತ್ ಅಲ್ಲ. ರಮಳಾನಿನ ತರಾವೀಹ್‌ನ ಕುರಿತು ಇದು ಒಳ್ಳೆಯ ಬಿದ್‌ಆತ್ ಎಂದು ಉಮರ್ ರಳಿಯಲ್ಲಾಹು ಅನ್ಹು ರವರು ಪ್ರಸ್ತಾವಿಸಿದ್ದಾರೆ ಅಲ್ಲವೇ..ಅದು

ಮುಂಚೆ ಇರಲಿಲ್ಲ ವೆಂದೂ ಉಮರ್ ರಳಿಯಲ್ಲಾಹು ಅನ್ಹು ರವರು ಉಪದೇಶಿಸಿದ್ದು ಈ ಕಾರ್ಯ ಮೇಲೆ ಹೇಳಿದ ಒಂದು ಪ್ರಮಾಣ ದೊಂದಿಗೂ ವಿರುದ್ಧ ವಾಗದೇ ಇರುವಂತಹದ್ದು ಆಗಿದೆ. "

ಇದುವರೆಗೆ ಇರುವಂತಹದ್ದು ಇಮಾಂ ಶಾಫಿಈ ರಳಿಯಲ್ಲಾಹು ಅನ್ಹು ರವರ ಮಾತಾಗಿದೆ. ಅವಾಗ ಅದು ಹಲಾಲ್ ಆಗುವುದಕ್ಕೂ ಸಾಧ್ಯವಿಲ್ಲ ಎಂದು ಹೇಳಿ ಮುಂದು ವರೆಯುವ ಇಮಾಂ ಫಾಕಿಹಾನಿ ರಹ್ಮತುಲ್ಲಾಹಿ ಅಲೈಹಿ ರವರ ವಾದವನ್ನು ಅಂಗೀಕರಿಸಲು ಸಾಧ್ಯವಿಲ್ಲ ಎಂದು ಅರ್ಥೈಸಬಹುದು. ಕಾರಣ, ಮೌಲಿದ್ ಆಚರಣೆ ಖುರ್ಆನ್ ನೊಂದಿಗೂ ಸುನ್ನತ್ ನೊಂದಿಗೂ ಇಜ್ಮಾಅ್ ನೊಂದಿ ಗೂ ವಿರುದ್ಧವಲ್ಲ. ಅದುದರಿಂದ ಇಮಾಂ ಶಾಫಿಈ ರಳಿಯಲ್ಲಾಹು ಅನ್ಹು ರವರ ಪ್ರಸ್ತಾವನೆಯಲ್ಲಿ ಹೇಳಿದಂತೆ ಅದು ಆಕ್ಷೇಪಿಸಲ್ಪಡುವ ಬಿದ್ಆತ್ ಅಲ್ಲ. ಬದಲಾಗಿ ಅದ್ಯ ಕಾಲದಲ್ಲಿ ತಿಳಿಯಲ್ಪಡದ ಒಳ್ಳೆಯ ಕಾರ್ಯದಲ್ಲಿ ಒಳಪಟ್ಟದಾಗಿದೆ. ಕಾರಣ,ದೋಷದಿಂದ ಮುಕ್ತ ವಾದ ಅನ್ನದಾನ ಒಳ್ಳೆಯ ಕಾರ್ಯವಲ್ಲವೇ..

ಆದುದರಿಂದ ಇಬ್ನು ಅಬ್ದುಸ್ಸಲಾಮ್ ರಳಿಯಲ್ಲಾಹು ಅನ್ಹು ರವರು ತನ್ನ ಪ್ರಸ್ತಾವನೆಯಲ್ಲಿ ಹೇಳಿದ ಹಾಗೆ ಸುನ್ನತ್ತಾದ ಬಿದ್ಅತ್‌ಗಳಲ್ಲಿ ಒಳಪಟ್ಟದ್ದಾಗಿ ಅದನ್ನು ಕಾಣಬೇಕು.

?..ಇಮಾಂ ಫಾಕಿಹಾನಿ ರವರು ಮುಂದುವರೆದು ಹೇಳುತ್ತಾರೆ.:

وَالثَّانِي: أَنْ تَدْخُلَهُ الْجِنَايَةُ وَتَقْوَى بِهِ الْعِنَايَةُ حَتَّى يُعْطَى أَحَدُهُمُ الشَّيْءَ وَنَفْسُهُ تَتْبَعُهُ وَقَلْبُهُ يُؤْلِمُهُ وَيُوجِعُهُ لِمَا يَجِدُ مِنْ أَلَمِ الْحَيْفِ، وَقَدْ قَالَ الْعُلَمَاءُ: أَخْذُ الْمَالِ بِالْحَيَاءِ كَأَخْذِهِ بِالسَّيْفِ لَا سِيَّمَا إِنِ انْضَافَ إِلَى ذَلِكَ شَيْءٌ مِنَ الْغِنَاءِ - مَعَ الْبُطُونِ الْمَلْأَى - بِآلَاتِ الْبَاطِلِ مِنَ الدُّفُوفِ وَالشَّبَّابَاتِ وَاجْتِمَاعِ الرِّجَالِ مَعَ الشَّبَابِ الْمُرْدِ وَالنِّسَاءِ الْفَاتِنَاتِ، إِمَّا مُخْتَلِطَاتٍ بِهِنَّ أَوْ مُشْرِفَاتٍ، وَالرَّقْصِ بِالتَّثَنِّي وَالِانْعِطَافِ وَالِاسْتِغْرَاقِ فِي اللَّهْوِ وَنِسْيَانِ يَوْمِ الْمَخَافِ

ಅಪರಾಧ ಸಹಿತವಾದ ಮೌಲಿದ್ ಆಚರಣೆಯಾಗಿದೆ

ಎರಡನೆಯದು ಒಬ್ಬಾತ ಅದಕ್ಕೆ ಬೇಕಾಗಿ ಹಣ ನೀಡುವುದು ಮನ ಸಂತೃಪ್ತಿಯೊಂದಿಗೆ ಅಲ್ಲ ಅಪರಾಧವನ್ನು ಮನಗೊಂಡು ಕೊಡುವವನ ಮನಸ್ಸು ನೋವನ್ನು ಅನುಭವಿಸುತ್ತದೆ. ಹೇಗೆ ಕೊಡದಿರುವುದು ಎಂಬ ಲಜ್ಜೆ ಕಾರಣದಿಂದ ಕೊಡುವುದನ್ನು ಸ್ವೀಕರಿಸುವುದು ಖಡ್ಗ ತೋರಿಸಿ ಹಣ ಸಂಗ್ರಹಿಸುವುದಕ್ಕೆ

ಸಮಾನವಾಗಿದೆ. ಎಂದು ಪಂಡಿತರುಗಳು ಪ್ರಸ್ತಾಪಿಸಿದ್ದಾರೆ. ವಿನೋಧ ಸಾಮಾಗ್ರಿಗಳು ಉಪಯೋಗಿಸಿರುವ ಹಾಡುಗಳು ಯುವತಿಯರ ಸಾನಿಧ್ಯವು ಅಮ್ರದ್ ಗಳೊಂದಿಗೆ ಆಕರ್ಷಿಸಲು ಪಡುವ ಸ್ತ್ರೀ ಗಳೊಂದಿಗೆ ಇರುವ ಒಂದುಗೂಡುವಿಕೆಯು ಇದೆಲ್ಲ ತಪ್ಪು.

=...ಇಮಾಮ್ ಸುಯೂತಿ ರಹ್ಮತುಲ್ಲಾಹಿ ಅಲೈಹಿ ರವರ ಖಂಡನೆ: "

“ ಎರಡನೇದಾಗಿ ಇಮಾಮ್ ಫಾಕಿಹಾನಿ ರವರು ಹೇಳಿದ್ದು ಸರಿಯಾಗಿದೆ ಆದರೆ ಮೌಲಿದ್  ಆಚರಣೆಯಲ್ಲಿ ಎಡೆಯಲ್ಲಿ ಸೇರಿದ ನಿಷಿದ್ಧ ಕಾರ್ಯಗಳ ಹೆಸರಿನಲ್ಲಿ ಆಗಿದೆ ಅದು ನಿಷಿದ್ಧ ಆದದ್ದು. ನೆಬಿ ದಿನದಲ್ಲಿ ಸಂತಸ ಪ್ರಕಟಿಸುವುದಕ್ಕಾಗಿ ಸಮ್ಮೇಳಿಸುವುದರ ಕಾರಣದಿಂದಲ್ಲ. ಇದೇ ತರಹದ ಕಾರ್ಯಗಳು ಜುಮಾಅಕ್ಕೆ ಒಂದು ಗೂಡುವಾಗ ಉಂಟಾದರೆ ಅದು ತಪ್ಪಾದದ್ದು ಆಗಿದೆ ಎಂದಾದರೆ...? ಅದಕ್ಕೆ ಬೇಕಾಗಿ ಒಂದು ಗೂಡುವುದನ್ನು ಆಕ್ಷೇಪಿಸುವಿಕೆಯು ಸಲ್ಲದು ಎಂಬ ಕಾರ್ಯ ವ್ಯಕ್ತವಲ್ಲವೇ. ರಮಾದಾನ್ ತಿಂಗಳಲ್ಲಿ ಜನರು ತರಾವೀಹ್ ನಮಾಜಿಗೆ ಬೇಕಾಗಿ

ಸಮ್ಮೇಳಿಸುವಾಗ ಇವುಗಳಲ್ಲಿ ಕೆಲವು ಇರುವುದಾಗಿ ನಮ್ಮ ಶ್ರದ್ಧೆಯಲ್ಲಿ ಇದೆ. ಇಂತಹವುಗಳ ಹೆಸರು ಹೇಳಿ ತರಾವೀಹ್‌ಗೆ ಬೇಕಾಗಿ ಸಮ್ಮೇಳಿಸುವುದನ್ನು ಆಕ್ಷೇಪಿಸಬಹುದೇ...ಇಲ್ಲ! ಆವಾಗ ನನಗೆ ಹೇಳಲಿಕ್ಕೆ ಇರುವುದು ಇದಾಗಿದೆ. ನೆಬಿ ದಿನದಲ್ಲಿ ಸಮ್ಮೇಳಿಸುವುದು ಸುನ್ನತ್ತೂ,ಆರಾಧನೆಯೂ ಆಗಿದೆ. ಅದು ಕಾರಣವಾಗಿ ಉಂಟಾಗುವ ತಪ್ಪಾದ ಕಾರ್ಯಗಳು ಆಕ್ಷೇಪಾರ್ಹವು ತಪ್ಪು ಆಗಿದೆ. "



?..ಫಾಕಿಹಾನಿ ರವರ ವಾದ ಐದು :-

"‘‘ ನೆಬಿ ಸಲ್ಲಲ್ಲಾಹು ಅಲೈಹಿ ವಸಲ್ಲಂ ರವರ ಜನಿಸಿದ ಸಮಯವಾದ ರಬೀವುಲ್ ಅವ್ವಲಲ್ಲೇ ಅಲ್ಲವೇ ನೆಬಿ ಸ್ವಲ್ಲಲಾಹು ಅಲೈಹಿ ವಸಲ್ಲಮರು ವಫಾತಾದದ್ದು ಆದುದರಿಂದ ದುಃಖಕ್ಕಿಂತಲೂ ಅಧಿಕ. ಆ ತಿಂಗಳಲ್ಲಿ ಸಂತಸಪಡಲು ಸಾಧ್ಯವಿಲ್ಲ.""

=..ಇಮಾಮ್ ಸುಯೂತಿ (ರ) ರವರ ಖಂಡನೆ :-

"‘‘ ಇದಕ್ಕೆ ಹೇಳಲಿಕ್ಕೆ ಇರುವ ಉತ್ತರ ಇದಾಗಿದೆ. ನೆಬಿ ಸ್ವಲ್ಲಲಾಹು ಅಲೈಹಿ ವಸಲ್ಲಮರವರ ಜನನ ನಮಗೆ ಅತೀ ದೊಡ್ಡ ಅನುಗ್ರಹವು ಅವರ ವಫಾತ್ ನಮಗೆ ಮುಸೀಬತೂ ಆಗಿದೆ. ಅನುಗ್ರಹಗಳಿಗೆ ಕೃತಜ್ಞತೆ ಸಲ್ಲಿಸಲು ಮುಸೀಬತ್ ಬರುವಾಗ ಆತ್ಮ ಸಂಯಮನ ಪಾಲಿಸಲು ಸ್ವಬ್‌ರ್(ತಾಳ್ಮೆ) ಪಡಲು ಆಗಿದೆ ಇಸ್ಲಾಮಿನ ಶರೀಅತ್ ನಿರ್ದೇಶಿಸುವುದು. ಒಂದು ಮಗು ಹುಟ್ಟಿದರೆ

ಅದರ ಹೆಸರಲ್ಲಿ ಸಂತಸಪಟ್ಟು ಕೃತಜ್ಞತೆ ಸಲ್ಲಿಸುತ್ತಲೂ ಅದರ ಹೆಸರಲ್ಲಿ ಹಖೀಖ ದ್ಸಬಹ್ ಗೈಯ್ಯಲು ಇಸ್ಲಾಂ ನಿರ್ದೇಶಿಸಿದೆ. ಅದೇ ಸಮಯ ಮರಣ ಹೊಂದಿದಾಗ ದ್ಸಬಹ್ ನಡೆಸಲು ಇಸ್ಲಾಂ ನಿರ್ದೇಶಿಸುವುದಿಲ್ಲ ಬದಲಾಗಿ ಅಟ್ಟಹಾಸ ಗೈಯುವಿಕೆಯನ್ನು ದು:ಖಿಸುವಿಕೆಯನ್ನು ಇಸ್ಲಾಂ ವಿರೋಧಿಸಿದೆ. ಆಗ ರಬಿವುಲ್ ಅವ್ವಲ್ ತಿಂಗಳಲ್ಲಿ ನಬಿ ಸ್ವಲ್ಲಲಾಹು ಅಲೈಹಿ ವಸಲ್ಲಮರವರ ಜನ್ಮ ದಿವಸದಲ್ಲಿ ಸಂತಸ ಪ್ರಕಟಿಸುವಿಕೆಯು ಒಳ್ಳೆಯ ಕಾರ್ಯವಾಗಿದೆ ಎಂದು ನೆಬಿ ಸ್ವಲ್ಲಲಾಹು ಅಲೈಹಿ ವಸಲ್ಲಮ ರವರ ವಿಯೋಗದ ಹೆಸರಲ್ಲಿ ದುಖ್ಖಾಚರಣೆ ನಡೆಸುವುದು ಸರಿಯಲ್ಲವೆಂದು ನಿಯಮಗಳಿಂದ ಅರ್ಥೈಸಬಹುದಾಗಿದೆ. ಹುಸೇನ್ ರಳಿಯಲ್ಲಾಹು ಅನ್ಹು ರವರನ್ನು ವಧಿಸಿದ ದಿವಸ ದುಖ್ಖಾಚರಣೆಯನ್ನು ರಾಫಿಳಿಯ್ಯತ್ ಆಚರಿಸುವುದನ್ನು ಆಕ್ಷೇಪಿಸಿ. ಇಬ್ನು ರಜಬ್ ರಹ್ಮತುಲ್ಲಾಹಿ ಅಲೈಹಿ ' ಲತ್ವಾಇಫ್' "ಎಂಬ ಗ್ರಂಥದಲ್ಲಿ ಈ ಪ್ರಕಾರ ಹೇಳಿದ್ದು ಕಾಣಬಹುದು: ಅಂಬಿಯಾ ಗಳಿಗೆ ಮುಸಿಬತ್ ಎದುರಾದರೂ ಅವರು ಮರಣ ಹೊಂದಿದ ದಿವಸದಲ್ಲಿ ದುಖ್ಖಾಚರಣೆ ನಡೆಸಲು ಅಲ್ಲಾಹನು ಆಜ್ಞಾಪಿಸಿಲ್ಲ." (ಅಲ್ ಹಾವಿ ಲಿಲ್ ಫತಾವ 1/190-193)



ಒಟ್ಟಿನಲ್ಲಿ ಮೌಲಿದ್ ಆಚರಣೆ ಸುನ್ನತ್ತಾಗಿದೆ ಎಂದು ಪ್ರಮಾಣ ಬದ್ಧವಾಗಿ ಇಬ್ನು ಹಜರುಲ್ ಅಸ್ಕಲಾನಿ ರಹ್ಮತುಲ್ಲಾಹಿ ಅಲೈಹಿ ಹಾಫಿಲ್ ಜಲಾಲುದ್ದೀನ್ ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ, ಇಮಾಮ್ ನವವಿ ರಳಿಯಲ್ಲಾಹು ಅನ್ಹು ರವರ ಉಸ್ತಾದ್ ಅಬೂ ಶಾಮ ರಳಿಯಲ್ಲಾಹು ಅನ್ಹು ಮುಂತಾದ ಹಲವಾರು ಪಂಡಿತರುಗಳು ಸಮರ್ಥಿಸುವಂತದ್ದಾಗಿದೆ.ಮಾಲಿಕ್ ಮದ್್ಸ ಹಬ್ ಗಾರರಾದ ಪಾಕಿಹಾನಿ ರವರ ಶ್ರದ್ಧೆಯಲ್ಲಿ ತಿಳಿಯಲ್ಪಟ್ಟ ಯಾವುದೋ ಕೆಲ ಆಚರಣೆಗಳ ಪಶ್ಚಾತ್ತಳದಲ್ಲಿ ಆಗಬಹುದು ಅದನ್ನು ಅವರು ವಿರೋಧಿಸಿದ್ದು. ಅವರು ನೀಡಿದ ಒಂದು ಫತ್ವಾದಲ್ಲಾಗಿದೆ ಎಲ್ಲವೂ ಅವರು ಆ ಪ್ರಕಾರ ಹೇಳಿದ್ದು ಫತ್ವಾಗಳಿಗೆಲ್ಲ ಕೆಲ ಸಂದರ್ಭಗಳೂ ಕೆಲ ಸನ್ನಿವೇಶಗಳು ಉಂಟಾಗಬಹುದಲ್ಲವೇ...?

ಅಂದರೆ ನೂತನವಾಗಿ ಉಂಟು ಮಾಡುವ ಕಾರ್ಯಗಳು ಹರಾಮಿನಲ್ಲೂ ,ಕರಾಹತ್ತಿನಲ್ಲೂ ಪರಿಮಿತವಾದ ದೆಂಬ ಅವರ ವಾದವನ್ನು ಇಮಾಂ ಸುಯೂತ್ವಿ ರಹ್ಮತುಲ್ಲಾಹಿ ಅಲೈಹಿ ರವರು ಹೇಳಿದಂತೆ ಪ್ರಮಾಣ ಗಳೊಂದಿಗೆ ಸಾಮ್ಯತೆ ಇಲ್ಲದಂತಾಗಿದೆ.

ಇಮಾಮ್ ಮುಸ್ಲಿಂ ರಳಿಯಲ್ಲಾಹು ಅನ್ಹು ರವರು ನಿವೇದನೆ ಗೈದ ಹದೀಸ್ ನಲ್ಲಿ ಈ ಪ್ರಕಾರ ಕಾಣಬಹುದಾಗಿದೆ.

ನೆಬಿ ಸ್ವಲ್ಲಲಾಹು ಅಲೈಹಿ ವಸಲ್ಲಮ ರು ಹೇಳುತ್ತಾರೆ:

فَقَالَ رَسُولُ اللَّهِ -صلى الله عليه وسلم- « مَنْ سَنَّ فِى الإِسْلاَمِ سُنَّةً حَسَنَةً فَلَهُ أَجْرُهَا وَأَجْرُ مَنْ عَمِلَ بِهَا بَعْدَهُ مِنْ غَيْرِ أَنْ يَنْقُصَ مِنْ أُجُورِهِمْ شَىْءٌ وَمَنْ سَنَّ فِى الإِسْلاَمِ سُنَّةً سَيِّئَةً كَانَ عَلَيْهِ وِزْرُهَا وَوِزْرُ مَنْ عَمِلَ بِهَا مِنْ بَعْدِهِ مِنْ غَيْرِ أَنْ يَنْقُصَ مِنْ أَوْزَارِهِمْ شَىْءٌ

"ಇಸ್ಲಾಮಿನಲ್ಲಿ ಯಾರಾದರೂ ಒಂದು ಒಳ್ಳೆಯ ಚರ್ಯೆಯನ್ನು ಕಾರ್ಯರೂಪಕ್ಕೆ ತಂದರೆ ಅವನ ನಂತರ ಯಾರೊಬ್ಬನೂ ಅನುಸರಿಸಿ ಪ್ರವರ್ತಿಸಿದ್ದ ಆದರೆ ಅದು ಅನುಸರಿಸಿ ಪ್ರವರ್ತಿಸುವವರಿಗೆ ಲಭಿಸುವಂತಹ ತತುಲ್ಯವಾದ ಪ್ರತಿಫಲವನ್ನು ಅದನ್ನು ಕಾರ್ಯರೂಪಕ್ಕೆ ತಂದವನಿಗೂ ಲಭಿಸಲ್ಪಡುವುದು. ಅದರ ಪ್ರತಿಫಲದಿಂದ ಯಾವುದೊಂದು ಕಡಿಮೆಯಾಗದು. ಇಸ್ಲಾಮಿನಲ್ಲಿ ಯಾರಾದರೂ ಒಂದು ಕೆಟ್ಟದಾದ ಚರ್ಯೆಯನ್ನು ಕಾರ್ಯರೂಪಕ್ಕೆ ತಂದರೆ ಅವನ ನಂತರ ಅದನ್ನು ಬೇರೆಯವರು ಅನುಸರಿಸಿ

**ಪ್ರವರ್ತಿಸಿದ್ದೆ ಆದರೆ ಅದು ಅನುಸರಿಸಿ ಪ್ರವರ್ತಿಸುವವರಿಗೆ ಲಭಿಸುವಂತೆ ತತ್ಸುಲ್ಯವಾದ ಶಿಕ್ಷೆ ಅದು ಕಾರ್ಯರೂಪಕ್ಕೆ ತಂದವನಿಗೂ ಬರೆಯಲ್ಪಡುದು ಅವರ ಶಿಕ್ಷೆಯಿಂದ ಯಾವುದೊಂದು ಕಡಿಮೆಗೊಳಿಸಲಾರದು." (ಮುಸ್ಲಿಂ, 4380)**

**ಈ ಹದೀಸ್ ವಿಶದಿಗರಿಸುತ್ತಾ ಇಮಾಂ ನವವಿ ರಳಿಯಲ್ಲಾಹು ಅನ್ಹು ರವರು ಬರೆಯುತ್ತಾರೆ:**

وَفِي الحديث الآخر من دعا إلى هدى ومن دعا إلى ضلالة
هَذَانِ الْحَدِيثَانِ صَرِيحَانِ فِي الْحَثِّ عَلَى اسْتِحْبَابِ سَنِّ الْأُمُورِ
الْحَسَنَةِ وَتَحْرِيمِ سَنِّ الْأُمُورِ السَّيِّئَةِ وَأَنَّ مَنْ سَنَّ سُنَّةً حَسَنَةً
كَانَ لَهُ مِثْلُ أَجْرِ كُلِّ مَنْ يَعْمَلُ بِهَا إِلَى يَوْمِ الْقِيَامَةِ وَمَنْ سَنَّ
سُنَّةً سَيِّئَةً كَانَ عَلَيْهِ مِثْلُ وِزْرِ كُلِّ مَنْ يَعْمَلُ بِهَا إِلَى يَوْمِ
الْقِيَامَةِ وَأَنَّ مَنْ دَعَا إِلَى هُدًى كَانَ لَهُ مِثْلُ أُجُورِ مُتَابِعِيهِ أَوْ
إِلَى ضَلَالَةٍ كَانَ عَلَيْهِ مِثْلُ آثَامِ تَابِعِيهِ سَوَاءٌ كَانَ ذَلِكَ الْهُدَى
وَالضَّلَالَةُ هُوَ الَّذِي ابْتَدَأَهُ أَمْ كَانَ مَسْبُوقًا إِلَيْهِ وَسَوَاءٌ كَانَ ذَلِكَ
تَعْلِيمُ عِلْمٍ أَوْ عِبَادَةٍ أَوْ أَدَبٍ أَوْ غَيْرُ ذَلِكَ.§

ಬೆರೊಂದು ಹದೀಸ್ ನಲ್ಲಿ 'ಯಾರಾದರೂ ಸನ್ಮಾರ್ಗ ಕ್ಕೆ ಅಹ್ವಾನ ನೀಡಿದರೆ, ಯಾರಾದರೂ ದುರ್ಮಾರ್ಗ ಕ್ಕೆ ಅಹ್ವಾನ ನೀಡಿದರೆ." ಎಂಬಾರ್ಥ ಬರುವ ಪರಾಮರ್ಶ ವಾಗಿದೆ ಇರುವುದು. ಈ ಎರಡು ಹದೀಸ್ ಒಳ್ಳೆಯ ಕಾರ್ಯ ವನ್ನು ಕಾರ್ಯ ರೂಪಕ್ಕೆ ತರುವುದು ಸುನ್ನತ್ತೆಂದೂ ಕೆಟ್ಟದಾದ ಕಾರ್ಯ ಗಳನ್ನು  ಕಾರ್ಯ ರೂಪಕ್ಕೆ ತರುವುದು ನಿಷಿದ್ಧವಾದುದೆಂದು ವ್ಯಕ್ತ ಪಡಿಸುತ್ತದೆ. ಒಬ್ಬಾತ ಒಂದು ಒಳ್ಳೆಯ ಚರ್ಚೆಯನ್ನು ಕಾರ್ಯ ರೂಪಕ್ಕೆ ತಂದರೆ ಅಂತ್ಯ ದಿ ನದವರೆಗೂ ಅದನ್ನು ಅನುಸರಿಸಿ ಪ್ರವರ್ತಿಸುವವರಿಗೆ ಲಭಿಸುವುದರೊಂದಿಗೆ ತತುಲ್ಯ ವಾದ ಪ್ರತಿಫಲ ಅವರಿಗೂ ಲಭಿಸುತ್ತದೆ ಎಂದೂ. ಕೆಟ್ಟ ಚರ್ಯೆ ಕಾರ್ಯ ರೂಪಕ್ಕೆ ತಂದವರಿಗೆ ಅದನ್ನು ಅನುಸರಿಸಿ ಅಂತ್ಯ ದಿನದವರೆಗೂ ಅದನ್ನು ಪ್ರರ್ವತಿಸುವವರಿಗೆ ಲಭಿಸುವಂತಹ ತತುಲ್ಯವಾದ ಶಿಕ್ಷೆಯೂ ಲಭಿಸುತ್ತದೆ ಎಂದೂ ಹದೀಸ್ ವ್ಯಕ್ತ ಪಡಿಸುತ್ತದೆ. ಅ ಸನ್ಮಾರ್ಗ ವೂ ದುರ್ಮಾರ್ಗವೂ ಅದನ್ನು ಪ್ರಾರಂಭಿಸಿದಾಗಲೀ, ಮುಂಚೇನೆ ಇರುವುದಂತದಾಗಿರಲೀ. ಅದು ಜ್ಞಾನ ಕಲಿಸುವಂತದ್ದೋ, ಶಿಸ್ತು ಕಲಿ ಯುವಂತದ್ದೋ, ಆರಾಧನೆಯೋ ಅಥವಾ ಇತರವುಗಳೋ ಆಗಲಿ."  (ಶರಹು ಮುಸ್ಲಿಮ್)

ಮೊದಲನೆದಾಗಿ ಒಂದು ಕಾರ್ಯ ವನ್ನು ಮಾದರಿ ಕಾಣಿಸುವುದಕ್ಕೆ 'ಸನ್ನ' ಎಂದು ಹದೀಸ್ ನಲ್ಲಿ ಪ್ರಯೋಗಿಸಿದ್ದಾಗಿ ಕಾಣಬಹುದು.

ಇಮಾಂ ಬುಖಾರಿ ರಳಿಯಲ್ಲಾಹು ಅನ್ಹು ರವರು ನಿವೇದನೆ:

قَالَ رَسُولُ اللَّهِ صَلَّى اللَّهُ عَلَيْهِ وَسَلَّمَ لَا تُقْتَلُ نَفْسٌ ظُلْمًا إِلَّا كَانَ عَلَى ابْنِ آدَمَ الْأَوَّلِ كِفْلٌ مِنْ دَمِهَا لِأَنَّهُ أَوَّلُ مَنْ سَنَّ الْقَتْلَ

"" ಅಕ್ರಮವಾಗಿ ಕೊಲೆ ಗೈಯ್ಯಲ್ಪಟ್ಟ ಯಾವ ಶರೀರದ ರಕ್ತ ದಲ್ಲೂ ಆದಂ ನೆಬಿ ಅಲೈಹಿ ಸಲಾಮ್ ರ ಪುತ್ರನಿಗೆ ಒಂದು ಅಂಶವಿರುತ್ತದೆ.ಕಾರಣ, ಪ್ರಥಮವಾಗಿ ಕೊಲೆ ಎಂಬುವುದನ್ನು ಕಾರ್ಯ ರೂಪಕ್ಕೆ ತಂದದ್ದು ಅವರಾಗಿದ್ದಾರೆ.” "

(ಸ್ವಹೀಹುಲ್ ಬುಖಾರಿ)

ಲೋಕದಲ್ಲಿ ಮೊದಲನೆಯದಾಗಿ ಕೊಲೆ ನಡೆಸಿದ್ದು ಆದಂ ನೆಬಿ ಅಲೈಹಿ ಸಲಾಮ್ ರವರ ಮಗ ಖಾಬೀಲ್ ಅಲ್ಲವೇ.

ಖುಬೈಬ್ ರಳಿಯಲ್ಲಾಹು ಅನ್ಹು ರವರ ಸಂಭವದಿಂದ ಈ ಪ್ರಕಾರ ಕಾಣಬಹುದಾಗಿದೆ:

فَكَانَ خُبَيْبٌ هُوَ سَنَّ الرَّكْعَتَيْنِ لِكُلِّ امْرِئٍ مُسْلِمٍ قُتِلَ صَبْرًا

"" ರಕ್ತ ಸಾಕ್ಷಿಯಾಗಲೂ ಹೋಗುವ ಯಾವ ಮುಸ್ಲಿಮನಿಗೂ ಎರಡು ರಕ ಅತ್ ಸುನ್ನತ್ ನಮಾಝ್ ಕಾರ್ಯ ರೂಪಕ್ಕೆ ತಂದದ್ದು ಖುಬೈಬ್ ರಳಿಯಲ್ಲಾಹು ಅನ್ಹು ರವರಾಗಿದ್ದಾರೆ."" (ಬುಖಾರಿ)

ಇಲ್ಲಿಯೂ ಪ್ರಥಮವಾಗಿ ಪ್ರಾರಂಭಿಸಿದರು ಎಂಬ ವಿಷಯ ಅಡಗಿದೆ.ಅವಾಗ ಇಸ್ಲಾಮಿನ ಅಡಿಸ್ತಾನ ಪ್ರಮಾಣಗಳಿಗೆ ವಿರುದ್ಧ ವಲ್ಲದ್ದೂ...ವಿಶುದ್ಧ ಖುರ್ ಆನಿನ, ನೆಬಿ ಸ್ವಲ್ಲಲಾಹು ಅಲೈಹಿ ರವರ ಸುನ್ನತ್ ನ ಹಾಗೂ ಸಮಾನ್ಯ ನಿರ್ದೇಶನ ಗಳ ಪರಿಧಿಯಲ್ಲಿ ಒಳಗೊಂಡ ಒಳ್ಳೆಯ ಕಾರ್ಯಗಳನ್ನು ಕಾರ್ಯ ರೂಪಕ್ಕೆ ತರುವುದು ಒಳ್ಳೆಯ ಕಾರ್ಯ ವೆಂದು ಮೇಲಿನ ಹದೀಸ್ ಕಲಿ ಸುತ್ತದೆ.ಅದುದರಿಂದ ನೆಬಿದಿನಾಚರಣೆ ಯಾರು ಮಾಡಿಲ್ಲ ಎಂಬ ವಾದವನ್ನು ಸಮ್ಮತ್ತಿಸಿದರೂ ಅದನ್ನು ವಿಮರ್ಶಿಸಲು ಇಸ್ಲಾಮಿನಲ್ಲಿ

ಪ್ರಮಾಣಗಳಿಲ್ಲ. ಆದುದರಿಂದ ಅಲ್ಲವೇ ಫಾಕಿಹಾನಿ ರಹ್ಮತುಲ್ಲಾಹಿ ಅಲೈಹಿ ರವರ ಮಾತುಗಳನ್ನು ಇಮಾಂ ಸುಯೂತ್ವೀ ರಹ್ಮತುಲ್ಲಾಹಿ ಅಲೈಹಿ ರವರು ಶಕ್ತವಾಗಿ ಖಂಡಿಸುವುದು.



ಅಲ್ಲಹನೇ ಸ್ವೀಕರಿಸು_.ಆಮೀನ್ ಯಾರಬ್ಬಲ್ ಅಲಮೀನ್